# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎಂ. ಎ ಗೋಪಾಲಸ್ವಾಮಿ
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1024
ಉತ್ತರಿಸಬೇಕಾದ ದಿನಾಂಕ : 29.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರವು ಹಾಲು ಉತ್ಪಾದಕರ ಸಹಕಾರ ಸಂಘಗಳ ಮೂಲಕ ಸಂಘದ ಸದಸ್ಯರಿಗೆ ಸಾಲ ನೀಡುವ ಯೋಜನೆಯನ್ನು ಜಾರಿಗೊಳಿಸಿದೆಯೇ: ಜಾರಿಗೊಳಿಸಿದ್ದಲ್ಲಿ, ಈ ಯೋಜನೆಯು ಯಾವ ದಿನಾಂಕದಿಂದ ಜಾರಿಗೆ ಬಂದಿದೆ: ಮತ್ತು ಇದಕ್ಕೆ ರೂಪಿಸಿರುವ ಮಾನದಂಡಗಳೇನು: (ಆದೇಶಗಳ ಸಹಿತ ಸಂಪೂರ್ಣ ವಿವರ ನೀಡುವುದು) | ಇಲ್ಲ.<br>ಆದರೆ, ಸರ್ಕಾರದ ಆದೇಶ ಸಂಖ್ಯೆ: ಸಿಒ 209 ಸಿಎಲ್ಎಸ್ 2020 ದಿ:22-07-2020 ರೀತ್ಯಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ/ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಇದರ ಮೂಲಕ ಹೈನುಗಾರಿಕೆ ಮತ್ತು ಮೀನುಗಾರಿಕೆಗೆ ದುಡಿಯುವ ಬಂಡವಾಳ ಉದ್ದೇಶಕ್ಕಾಗಿ ಕಿಸಾನ್ ಕ್ರೆಡಿಟ್ ಕಾರ್ಡ್ ಮೂಲಕ ಸಾಲ ವಿತರಿಸುವ ಯೋಜನೆ ಜಾರಿಗೊಳಿಸಲಾಗಿದೆ.<br>ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಈ ಕೆಳಕಂಡ ಮಾನದಂಡಗಳನ್ನು ರೂಪಿಸಲಾಗಿದೆ.<br>1. ಸಾಲ ಪಡೆಯುವ ರೈತರು ಹಾಲು ಉತ್ಪಾದಕ ಸಹಕಾರ ಸಂಘಗಳಿಗೆ ಕಡ್ಡಾಯವಾಗಿ ಹಾಲು ಪೂರೈಕೆ ಮಾಡುತ್ತಿದ್ದು, ಸಾಲದ ಅರ್ಜಿಯನ್ನು ಹಾಲು ಉತ್ಪಾದಕ ಸಹಕಾರ ಸಂಘಗಳು ಸಂಬಂಧಿಸಿದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ಅಥವಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಇದಕ್ಕೆ ಸಲ್ಲಿಸತಕ್ಕದ್ದು. ಜಿಲ್ಲಾ ಬ್ಯಾಂಕುಗಳು ಅರ್ಹ ರೈತರಿಗೆ ಸಾಲ ವಿತರಿಸತಕ್ಕದ್ದು.<br>2. ಈ ಯೋಜನೆಯು ಒಬ್ಬ ಫಲಾನುಭವಿಗೆ ಗರಿಷ್ಠ ರೂ. 2.00 ಲಕ್ಷಗಳವರೆಗೆ ಸಾಲ ನೀಡಲು ಅನ್ವಯವಾಗುತ್ತದೆ. ಹಾಗೂ ಒಂದು ಕುಟುಂಬಕ್ಕೆ ಬೆಳೆ ಸಾಲ ಮತ್ತು ಪಶುಸಂಗೋಪನೆ ಸಾಲ ಸೇರಿ ಒಟ್ಟು ರೂ. 3.00 ಲಕ್ಷ ಮೀರುವಂತಿಲ್ಲ.<br>3. ಸರ್ಕಾರಿ/ಸಹಕಾರಿ ಸ್ವಾಮ್ಯದ ಸಂಸ್ಥೆಗಳಲ್ಲಿ ನೌಕರನಾಗಿದ್ದು, ಮಾಸಿಕ ರೂ. 20000/-ಗಳ ವೇತನ/ಪಿಂಚಣಿ ಪಡೆಯುತ್ತಿರುವ ಅಥವಾ ಕಳೆದ 3 ವರ್ಷಗಳಲ್ಲಿ ಆದಾಯ ತೆರಿಗೆ ಪಾವತಿಸಿದ್ದರೆ ಅಂತಹ ರೈತರಿಗೆ ರಾಜ್ಯ ಸರ್ಕಾರದ ಬಡ್ಡಿ ಪ್ರೋತ್ಸಾಹಧನ ದೊರೆಯುವುದಿಲ್ಲ.<br>4. ಈ ಸಾಲವು ಗರಿಷ್ಠ ಒಂದು ವರ್ಷದ ಅವಧಿ ಹೊಂದಿರುತ್ತದೆ. |
| ಆ) | ಈ ಯೋಜನೆಯಡಿ ಹಾಸನ ಜಿಲ್ಲೆಯಲ್ಲಿ ಎಷ್ಟು ಜನರಿಗೆ ಎಷ್ಟು ಮೊತ್ತವನ್ನು ಇಲ್ಲಿಯವರೆಗೆ ಸಾಲವಾಗಿ ನೀಡಲಾಗಿದೆ; (ಫಲಾನುಭವಿ ಹೆಸರು ಮತ್ತು ಸಂಘದ ವಿವರಗಳೊಂದಿಗೆ | ಈ ಯೋಜನೆಯಡಿ ಹಾಸನ ಜಿಲ್ಲೆಯಲ್ಲಿ ಹೈನುಗಾರಿಕೆ ಉದ್ದೇಶಕ್ಕಾಗಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಹಾಸನ ಇದರ ಮೂಲಕ 18819 ಫಲಾನುಭವಿಗಳಿಗೆ ರೂ.18.82 ಕೋಟಿಗಳ ಸಾಲ ವಿತರಿಸಿರುತ್ತಾರೆ. ಸಂಘವಾರು, ಫಲಾನುಭವಿವಾರು ಮತ್ತು ತಾಲ್ಲೂಕುವಾರು ಮಾಹಿತಿಯನ್ನು ಸಿಡಿ ರೂಪದಲ್ಲಿ **ಅನುಬಂಧ** ದಲ್ಲಿ ನೀಡಲಾಗಿದೆ. |

| | | |
|---|---|---|
| | ತಾಲ್ಲೂಕುವಾರು ಮಾಹಿತಿ ನೀಡುವುದು) | |
| | | |
| (ಇ) | ಹಾಲು ಉತ್ಪಾದಕರ ಸಹಕಾರ ಸಂಘಗಳಲ್ಲಿ ಸದಸ್ಯರಿಗೆ ಸಾಲ ವಿತರಣೆ ಮಾಡುವಾಗ ಸರ್ಕಾರದ ಮಾರ್ಗಸೂಚಿಗಳನ್ನು ಪಾಲನೆ ಮಾಡದೆ ತಾರತಮ್ಯ ನೀತಿ ಅನುಸರಿಸುತ್ತಿರುವುದರಿಂದ ಸದಸ್ಯರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಹಾಸನ ಜಿಲ್ಲೆಯಲ್ಲಿ ಇಂತಹ ಎಷ್ಟು ಪ್ರಕರಣಗಳು ಬೆಳಕಿಗೆ ಬಂದಿವೆ; ಇಂತಹ ಪ್ರಕರಣಗಳಲ್ಲಿ ಭಾಗಿಯಾಗಿರುವವರ ವಿರುದ್ಧ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ? (ಪ್ರಕರಣವಾರು ಮಾಹಿತಿ ನೀಡುವುದು) | ಇಲ್ಲ.<br><br>ಹಾಸನ ಜಿಲ್ಲೆಯ ಹಾಲು ಉತ್ಪಾದಕರ ಸಹಕಾರ ಸಂಘಗಳಲ್ಲಿ 42,359 ಸದಸ್ಯರು ಹಾಲು ಪೂರೈಸುತ್ತಿದ್ದು, ಈ ಪೈಕಿ 25,180 ರೈತರ ಅರ್ಜಿಗಳನ್ನು ಹಾಲು ಉತ್ಪಾದಕ ಸಹಕಾರ ಸಂಘಗಳು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ/ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್‌ಗೆ ಸಲ್ಲಿಸಿದ್ದು, ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಹಾಸನ, ಈ ಬ್ಯಾಂಕಿನಿಂದ 18819 ಅರ್ಜಿಗಳಿಗೆ ಸಾಲ ಮಂಜೂರು ಮಾಡಲಾಗಿದೆ. 2900 ರೈತರ ಅರ್ಜಿಗಳಿಗೆ ಸಂಬಂಧಿಸಿದಂತೆ ಅರ್ಜಿದಾರರು, ವೇತನದಾರ/ಪಿಂಚಣಿದಾರ/ಆದಾಯ ತೆರಿಗೆದಾರರಾಗಿರುವುದರಿಂದ ಬ್ಯಾಂಕಿನ ಹಂತದಲ್ಲಿ ತಿರಸ್ಕರಿಸಲಾಗಿದೆ. ಉಳಿದ 3461 ರೈತರ ಅರ್ಜಿಗಳಲ್ಲಿ ಆಧಾರ್ ಕಾರ್ಡ್, ರೇಷನ್ ಕಾರ್ಡ್ ಮತ್ತು ಆರ್‌ಟಿಸಿಯಂತಹ ದಾಖಲೆಗಳನ್ನು ಸಲ್ಲಿಸದೇ ಇರುವುದರಿಂದ ಅಗತ್ಯ ದಾಖಲೆ ಸಲ್ಲಿಸಲು ರೈತರಿಗೆ ತಿಳಿಸಲಾಗಿದೆ. |

**ಸಂಖ್ಯೆ: ಸಿಒ 362 ಸಿಎಲ್‌ಎಸ್ 2020**

(ಎಸ್.ಟಿ. ಸೋಮಶೇಖರ್)
**ಸಹಕಾರ ಸಚಿವರು**